## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 679

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 17-09-2021.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಜನ ಸಂಖ್ಯೆಗನುಗುಣವಾಗಿ ದೊಡ್ಡ ಗ್ರಾಮ ಪಂಚಾಯಿತಿಗಳನ್ನು ಮೇಲ್ದರ್ಜೆಗೇರಿಸುವ ವಿಚಾರ ಸರ್ಕಾರದ ಮುಂದಿದೆಯೇ; | ಹೌದು. |
| (ಆ) | ಗ್ರಾಮ ಪಂಚಾಯಿತಿಗಳನ್ನು ಮೇಲ್ದರ್ಜೆಗೇರಿಸಲು ಇರುವ ಮಾನದಂಡಗಳೇನು; | ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 ರನ್ವಯ ಗ್ರಾಮ ಪಂಚಾಯತಿಗಳನ್ನು ಪಟ್ಟಣ ಪಂಚಾಯತಿಯನ್ನಾಗಿ ಪರಿವರ್ತಿಸುವ ಮಾನದಂಡಗಳು ಈ ಕೆಳಗಿನಂತಿವೆ.<br>1)ಒಂದು ಪ್ರದೇಶದ ಜನಸಂಖ್ಯೆ 10000 ಕ್ಕಿಂತ ಕಡಿಮೆ ಇಲ್ಲದ ಮತ್ತು 20000 ಸಾವಿರಕ್ಕಿಂತ ಹೆಚ್ಚಿಲ್ಲದ,<br>2)ಒಂದು ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚ.ಕಿ.ಮೀ. ಪ್ರದೇಶಕ್ಕೆ 400 ನಿವಾಸಿಗಳಿಗಿಂತ ಕಡಿಮೆ ಇಲ್ಲದ ಹೊರತು,<br>3)ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇ. 50 ಕ್ಕಿಂತ ಕಡಿಮೆ ಇಲ್ಲದ ಹೊರತು,<br>ಅಂತ ಪ್ರದೇಶವನ್ನು ಪಟ್ಟಣ ಪಂಚಾಯತಿಯನ್ನಾಗಿ ಪರಿವರ್ತಿಸಲಾಗುತ್ತದೆ. |
| (ಇ) | ಬೆಳಗಾವಿ ಜಿಲ್ಲೆಯ ಹಲವಾರು ದೊಡ್ಡ ಗ್ರಾಮ ಪಂಚಾಯಿತಿಗಳು ನಿಗದಿಗಿಂತ ಹೆಚ್ಚಿನ ಜನ ಸಂಖ್ಯೆಯನ್ನು ಹೊಂದಿದ್ದು, ಅವುಗಳನ್ನು ಯಾವ ಕಾಲಮಿತಿಯೊಳಗೆ ಮೇಲ್ದರ್ಜೆಗೇರಿಸಲಾಗುವುದು; | ಕಾಲಮಿತಿ ನಿರ್ದಿಷ್ಟಪಡಿಸಿರುವುದಿಲ್ಲ. |
| (ಈ) | ಬೆಳಗಾವಿ ಜಿಲ್ಲೆಯ ಯಾವ ಯಾವ ದೊಡ್ಡ ಗ್ರಾಮ ಪಂಚಾಯಿತಿಗಳನ್ನು ಮೇಲ್ದರ್ಜೆಗೇರಿಸಲು ನಿರ್ಧರಿಸಲಾಗಿದೆ? (ತಾಲ್ಲೂಕುವಾರು ವಿವರ ಒದಗಿಸುವುದು) | ಬೆಳಗಾವಿ ಜಿಲ್ಲೆಯಲ್ಲಿ 1)**ಬೆಳಗಾವಿ ತಾಲೂಕಿನ ಹಿರೆಬಾಗೇವಾಡಿ** ಗ್ರಾಮ ಪಂಚಾಯತಿಯನ್ನು ಪರಿವರ್ತಿಸಲು ಪಂಚಾಯತ ಅಭಿವೃದ್ಧಿ ಅಧಿಕಾರಿ, ಹಿರೇಬಾಗೇವಾಡಿ ಗ್ರಾಮ ಪಂಚಾಯತಿ ಇವರು ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಳಗಾವಿ ಇವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.<br>2)**ರಾಮದುರ್ಗ ತಾಲೂಕಿನ ಕಟಕೋಳ** ಗ್ರಾಮ ಪಂಚಾಯತಿಯನ್ನು ಪರಿವರ್ತಿಸಲು ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತಿ, ರಾಮದುರ್ಗ ಇವರು ತಹಶೀಲ್ದಾರ್, ರಾಮದುರ್ಗ ಇವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. |

ಸಂ. ಗ್ರಾಅಪ 328 ಗ್ರಾಪಂಅ 2021

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.